# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಶ್ರೀ ಆರ್.ಪ್ರಸನ್ನಕುಮಾರ್ (ಸ್ಥಳೀಯ ಸಂಸ್ಥೆಗಳಿಂದ ಚುನಾಯಿತರಾದವರು) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **354** |
| ಉತ್ತರಿಸಬೇಕಾದ ದಿನಾಂಕ | : | 15.09.2021 |
| ಉತ್ತರಿಸಬೇಕಾದ ಸಚಿವರು | : | ವಸತಿ ಮತ್ತು ಮೂಲಸೌಲಭ್ಯ ಅಭಿವೃದ್ಧಿ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಶಿವಮೊಗ್ಗ ಜಿಲ್ಲೆಯಲ್ಲಿ ರಾಜೀವ್ ಗಾಂಧಿ ವಸತಿ ನಿಗಮ, ಬಸವ ವಸತಿ ಯೋಜನೆ ಹಾಗೂ ವಾಜಪೇಯಿ ವಸತಿ ಯೋಜನೆಯಡಿಯಲ್ಲಿ ಕಳೆದ ಎರಡು ವರ್ಷಗಳಲ್ಲಿ ಎಷ್ಟು ಮನೆಗಳು ನಿರ್ಮಾಣವಾಗಿದೆ ; | ಕಳೆದ ಎರಡು ಆರ್ಥಿಕ ವರ್ಷಗಳಲ್ಲಿ ಹಿಂದಿನ ಸಾಲುಗಳಲ್ಲಿ ಪ್ರಗತಿಯಲ್ಲಿದ್ದ ಮನೆಗಳನ್ನು ಒಳಗೊಂಡಂತೆ ಶಿವಮೊಗ್ಗ ಜಿಲ್ಲೆಗೆ ಒಟ್ಟು 4631 ಮನೆಗಳನ್ನು ನಿರ್ಮಾಣ ಮಾಡಲಾಗಿದೆ. ಯೋಜನವಾರು ಮತ್ತು ವರ್ಷವಾರು ವಿವರ ಈ ಕೆಳಕಂಡಂತಿದೆ. |

| ಯೋಜನೆ | ಶ್ರೇಣಿ | ನಿರ್ಮಿಸಲಾದ ಮನೆಗಳು |
|---|---|---|
| ಬಸವ ವಸತಿ ಯೋಜನೆ | 2019-20 | 1811 |
| | 2020-21 | 2478 |
| **ಒಟ್ಟು** | | **4289** |
| ವಾಜಪೇಯಿ ನಗರ ವಸತಿ ಯೋಜನೆ | 2019-20 | 203 |
| | 2020-21 | 139 |
| **ಒಟ್ಟು** | | **342** |
| **ಒಟ್ಟಾರೆ** | | **4631** |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಆ) | ಪ್ರಸ್ತುತ ಸಾಲಿನಲ್ಲಿ ಮೇಲ್ಕಂಡ ನಿಗಮಗಳ ವತಿಯಿಂದ ಎಷ್ಟು ಮನೆಗಳನ್ನು ನಿರ್ಮಿಸಲು ಕ್ರಮ ಕೈಗೊಳ್ಳಲಾಗಿದೆ ;<br>(ತಾಲ್ಲೂಕುವಾರು ಮಾಹಿತಿ ನೀಡುವುದು) | 2021-22 ನೇ ಸಾಲಿನ ಆರ್ಥಿಕ ವರ್ಷದಲ್ಲಿ ಹಿಂದಿನ ಸಾಲುಗಳಲ್ಲಿ ಪ್ರಗತಿಯಲ್ಲಿದ್ದ ಮನೆಗಳನ್ನು ಒಳಗೊಂಡಂತೆ ಶಿವಮೊಗ್ಗ ಜಿಲ್ಲೆಯಲ್ಲಿ ಒಟ್ಟು **3071** ಮನೆಗಳನ್ನು ನಿರ್ಮಿಸುವ ಗುರಿಯನ್ನು ಹೊಂದಲಾಗಿದ್ದು, ಸದರಿ ಗುರಿಗೆ ಎದುರಾಗಿ ಒಟ್ಟು 662 ಮನೆಗಳನ್ನು ನಿರ್ಮಿಸಲಾಗಿದೆ. ತಾಲ್ಲೂಕುವಾರು ಮತ್ತು ಯೋಜನವಾರು ವಿವರ ಇಂತಿದೆ. |

| ಯೋಜನೆ | ತಾಲ್ಲೂಕು | ಗುರಿ | ನಿರ್ಮಿಸಲಾದ ಮನೆಗಳು |
|---|---|---|---|
| ಬಸವ ವಸತಿ ಯೋಜನೆ | ತೀರ್ಥಹಳ್ಳಿ | 278 | 97 |
| | ಭದ್ರಾವತಿ | 311 | 74 |
| | ಶಿಕಾರಿಪುರ | 302 | 62 |
| | ಶಿವಮೊಗ್ಗ | 202 | 30 |
| | ಸಾಗರ | 455 | 150 |
| | ಸೊರಬ | 728 | 122 |
| | ಹೊಸನಗರ | 339 | 93 |
| **ಒಟ್ಟು** | | **2615** | **628** |
| ವಾಜಪೇಯಿ ನಗರ ವಸತಿ ಯೋಜನೆ | ಕಾರಗಲ್ TP. | 1 | 0 |
| | ತೀರ್ಥಹಳ್ಳಿ TP. | 6 | 1 |
| | ಭದ್ರಾವತಿ CMC | 59 | 5 |
| | ಶಿಕಾರಿಪುರ | 68 | 10 |

| | | |
|---|---|---|
| TMC | | |
| ಶಿರಳಾಲಕೊಪ್ಪTP | 41 | 3 |
| ಶಿವಮೊಗ್ಗ CMC | 171 | 5 |
| ಸಾಗರ CMC | 83 | 10 |
| ಸೊರಬ TP | 12 | 0 |
| ಹೊಸನಗರ TP | 15 | 0 |
| **ಒಟ್ಟು** | **456** | **34** |
| **ಒಟ್ಟಾರೆ** | **3071** | **662** |

| | | |
|---|---|---|
| (ಇ) | ರಾಜ್ಯದಲ್ಲಿ ವಸತಿ ಯೋಜನೆಯಲ್ಲಿ ಮಂಜೂರಾಗಿದ್ದ 3.00 ಲಕ್ಷ ಫಲಾನುಭವಿಗಳ ಮನೆಗಳನ್ನು ತಡೆಹಿಡಿದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; ತಡೆಹಿಡಿಯಲು ಕಾರಣವೇನು ; ತಡೆಹಿಡಿದ ವಸತಿ ಯೋಜನೆಯನ್ನು ತೆರವು ಮಾಡಲು ಸರ್ಕಾರ ಯೋಜಿಸಿದೆಯೇ ; (ವಿವರ ನೀಡುವುದು) | ಸರ್ಕಾರದ "ಮನೆ" ಮಾರ್ಗಸೂಚಿಯನ್ವಯ ನಿಗಮದಿಂದ ಕಾಮಗಾರಿ ಆದೇಶ ನೀಡಿದ 90 ದಿನಗಳೊಳಗಾಗಿ ಫಲಾನುಭವಿಯು ಮನೆಯ ಕಾಮಗಾರಿಯನ್ನು ಪ್ರಾರಂಭಿಸಬೇಕಿದ್ದು, ಒಂದು ವರ್ಷದೊಳಗಾಗಿ ಮನೆಯನ್ನು ಪೂರ್ಣಗೊಳಿಸಬೇಕಾಗಿರುತ್ತದೆ. ಹೀಗೆ ನಿಗದಿತ ಸಮಯದಲ್ಲಿ ಕಾಮಗಾರಿಯನ್ನು ಪ್ರಾರಂಭ ಮಾಡಿಕೊಳ್ಳದ ಮನೆಗಳನ್ನು ಮನೆ ಮಾರ್ಗಸೂಚಿಗಳನ್ವಯ ಬ್ಲಾಕ್ ಮಾಡಲಾಗಿತ್ತು.<br>ಜನ ಪ್ರತಿನಿಧಿಗಳ ಕೋರಿಕೆಯಂತೆ ಸರಕಾರವು ದಿನಾಂಕ:14.02.2020 ರಂದು ಆದೇಶ ಹೊರಡಿಸಿ ವಿವಿಧ ವಸತಿ ಯೋಜನೆಗಳಡಿ ನಿಗದಿತ ಸಮಯದಲ್ಲಿ ಪ್ರಾರಂಭಗೊಳ್ಳದೇ ಬ್ಲಾಕ್ ಆಗಿದ್ದ ಮನೆಗಳ ಬ್ಲಾಕ್ ಅನ್ನು ತೆರವುಗೊಳಿಸಿ, ವಾಸ್ತವವಾಗಿ ಪ್ರಾರಂಭವಾಗಿರುವ ಮನೆಗಳ ಛಾಯಾ ಚಿತ್ರಗಳನ್ನು ಜಿಪಿಎಸ್ ಗೆ ಅಳವಡಿಸಲು ಒಂದೂವರೆ ತಿಂಗಳ ಕಾಲಾವಕಾಶವನ್ನು ನೀಡಲಾಗಿತ್ತು. ಈ ಅವಧಿಯಲ್ಲಿ ಜಿ.ಪಿ.ಎಸ್. ಮಾಡಿರುವ ಮನೆಗಳನ್ನು ಪ್ರಗತಿಗೆ ಪರಿಗಣಿಸಿ, ಉಳಿದ ಎಲ್ಲಾ ಮನೆಗಳನ್ನು ಸರ್ಕಾರದ ಆದೇಶ ಸಂಖ್ಯೆ: ವಇ 12 ಹೆಚ್‌ಎಹೆಚ್ 2020, ದಿನಾಂಕ:19.05.2020 ರನ್ವಯ ರದ್ದುಪಡಿಸಲಾಗಿದೆ. ಸಾಕಷ್ಟು ಕಾಲಾವಕಾಶವನ್ನು ನೀಡಿದಾಗ್ಯೂ, ಕೂಡ ಮನೆ ಪ್ರಾರಂಭ ಮಾಡಿಕೊಳ್ಳದಿರುವುದರಿಂದ ಈ ಮನೆಗಳನ್ನು ನಿಯಮಾನುಸಾರ ಶಾಶ್ವತವಾಗಿ ರದ್ದುಪಡಿಸಲಾಗಿದೆ. |
| (ಈ) | ರಾಜ್ಯದಲ್ಲಿ ವಸತಿ ಯೋಜನೆಗೆ ಬಿಡುಗಡೆಯಾದ ಅನುದಾನವೆಷ್ಟು ; (ಬಾಕಿ ಇರುವ ಫಲಾನುಭವಿಗಳ ವಿವರ ನೀಡುವುದು) | ವಿವಿಧ ವಸತಿ ಯೋಜನೆಗಳಡಿ ಮಂಜೂರಾದ ಮನೆಗಳಿಗೆ ಇಂದಿರಾ ಮನೆ ಆ್ಯಪ್ ನ ಮುಖಾಂತರ ಜಿ.ಪಿ.ಎಸ್ ಮಾಡಲಾದ ಮನೆಗಳ ಭೌತಿಕ ಪ್ರಗತಿಗನುಗುಣವಾಗಿ ಅನುದಾನ ಬಿಡುಗಡೆ ಮಾಡಲಾಗುತ್ತಿತ್ತು, ಆದರೆ, ಪ್ರಗತಿಯಲ್ಲಿರುವ ಮನೆಗಳಲ್ಲಿ ಕೆಲವು ಅನರ್ಹ ಫಲಾನುಭವಿಗಳ ಆಯ್ಕೆ ಕಂಡು ಬಂದಿರುವುದರಿಂದ ಅನುದಾನ ದುರ್ಬಳಕೆಯನ್ನು ತಡೆ ಹಿಡಿಯುವ ಉದ್ದೇಶದಿಂದ |

| | | |
|---|---|---|
| | | ಸರ್ಕಾರದ ಆದೇಶ ಸಂಖ್ಯೆ:ವಇ 154 ಹೆಚ್‌ಎಎಂ 2019, ದಿನಾಂಕ:16.11.2019 ರ ರೀತ್ಯಾ ಪ್ರಗತಿಯಲ್ಲಿರುವ ಮನೆಗಳನ್ನು ಇಂದಿರಾ ಮನೆ ಮೊಬೈಲ್ ಆಪ್ ಮೂಲಕ ಜಿ.ಪಿ.ಎಸ್ ಗೆ ಅಳವಡಿಸಿ, ಅರ್ಹಗೊಂಡ ನಂತರ ಸದರಿ ಮನೆಗಳ ಪ್ರಗತಿಯನ್ನು ಮತ್ತೊಮ್ಮೆ Geo ಆಧಾರಿತ ವಿಜಿಲ್ ಆಪ್ ಮೂಲಕ ಗ್ರಾಮೀಣ ಪ್ರದೇಶದಲ್ಲಿ ಜಿಲ್ಲಾ ಪಂಚಾಯತಿ ಮುಖ್ಯ ಕಾರ್ಯನಿರ್ವಹಣಾಧಿಕಾರಿಯವರು ಹಾಗೂ ನಗರ ಪ್ರದೇಶದಲ್ಲಿ ಜಿಲ್ಲಾಧಿಕಾರಿಯವರು ಪರಿಶೀಲಿಸಿ, ದೃಢೀಕರಿಸಿದ ನಂತರ ಸದರಿ ಫಲಾನುಭವಿಗಳ ಆಧಾರ್ ಜೋಡಣೆಯಾದ ಬ್ಯಾಂಕ್ ಖಾತೆಗೆ ಡಿ.ಬಿ.ಟಿ ಮುಖಾಂತರ ಅನುದಾನ ಬಿಡುಗಡೆ ಮಾಡಲಾಗುತ್ತಿತ್ತು.<br><br>ಪ್ರಸಕ್ತ ವರ್ಷದಲ್ಲಿ ಅಂದರೆ 2021-22 ನೇ ಆರ್ಥಿಕ ವರ್ಷದಲ್ಲಿ ರಾಜ್ಯದಲ್ಲಿ ವಿವಿಧ ವಸತಿ ಯೋಜನೆಗಳಡಿ ಮನೆ ನಿರ್ಮಾಣ ಮಾಡಿಕೊಂಡ ಫಲಾನುಭವಿಗಳಿಗೆ ಆಗಸ್ಟ್ 2021ರ ಅಂತ್ಯದವರೆಗೆ ರೂ.409.62 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ.<br><br>ಮುಂದುವರೆದಂತೆ ವಿವಿಧ ವಸತಿ ಯೋಜನೆಗಳಡಿ ಪ್ರಗತಿಯಲ್ಲಿರುವ ಮನೆಗಳ ಫಲಾನುಭವಿಗಳಿಗೆ ಅನುದಾನ ಬಿಡುಗಡೆ ಮಾಡುವಾಗ ಇಂದಿರಾ ಆಪ್ ಮತ್ತು ವಿಜಿಲ್ ಆಪ್ ಎಂಬ ಎರಡು ಪರಿಶೀಲನಾ ವಿಧಾನಗಳ ಮೂಲಕ ಅನುದಾನ ಬಿಡುಗಡೆ ಆಗುತ್ತಿದ್ದು, ಇದರಿಂದ ಆಗುವ ವಿಳಂಬವನ್ನು ತಪ್ಪಿಸಲು ಮೇಲ್ಕಂಡ ಇಂದಿರಾ ಆಪ್ ಮತ್ತು ವಿಜಿಲ್ ಆಪ್ ಅನ್ನು ಒಗ್ಗೂಡಿಸಿ, ಇಂದಿರಾ ವಿಜಿಲ್ ಆಪ್ ಎಂಬ ನೂತನ ತಂತ್ರಾಂಶವನ್ನು ಅಳವಡಿಸಲಾಗಿದ್ದು, ಫಲಾನುಭವಿಗಳಿಗೆ ಶೀಘ್ರವಾಗಿ ಅನುದಾನ ಬಿಡುಗಡೆ ಮಾಡಲು ಕ್ರಮ ಕೈಗೊಳ್ಳಲಾಗಿದೆ. |
| (ಉ) | ಕಳೆದ ಮೂರು ವರ್ಷಗಳಿಂದ ಯಾವುದೇ ಮನೆಗಳನ್ನು ಸರ್ಕಾರದಿಂದ ಮಂಜೂರಾತಿ ನೀಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಮಂಜೂರಾತಿಗಾಗಿ ಸರ್ಕಾರದ ತೆಗೆದುಕೊಂಡಿರುವ ಕ್ರಮಗಳೇನು ? (ವಿವರ ನೀಡುವುದು) | 2021-2022 ನೇ ಸಾಲಿನಲ್ಲಿ ರಾಜ್ಯ ಪುರಸ್ಕೃತ ಯೋಜನೆಯಡಿ 1 ಲಕ್ಷ ಮನೆಗಳ ಗುರಿಯನ್ನು ನಿಗದಿಪಡಿಸಲಾಗಿದೆ. ಪ್ರಧಾನ ಮಂತ್ರಿ ಆವಾಸ್ (ಗ್ರಾಮೀಣ) ಯೋಜನೆಯಡ್ಡಿ ಕೇಂದ್ರ ಸರ್ಕಾರದಿಂದ ಪರಿಷ್ಕೃತ ಗುರಿಯನ್ನು ನಿರೀಕ್ಷಿಸಲಾಗಿದೆ. ಸದರಿ ಗುರಿಯನ್ನು ಯೋಜನಾವಾರು/ವಿಧಾನ ಸಭಾ ಕ್ಷೇತ್ರವಾರು ಹಂಚಿಕೆ ಮಾಡಲು ಕ್ರಮ ವಹಿಸಲಾಗುತ್ತಿದೆ. |

ಸಂಖ್ಯೆ :ವಇ 294 ಹೆಚ್‌ಎಎಂ 2021

(ವಿ. ಸೋಮಣ್ಣ)
ವಸತಿ ಮತ್ತು ಮೂಲಸೌಲಭ್ಯ
ಅಭಿವೃದ್ಧಿ ಸಚಿವರು